| | | |
|---|---|---|
| 11. | (ಅ) ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ?<br>(ಆ) ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ?<br>(ಇ) ಮೇಲಿನ (ಅ) ಅಥವಾ/ ಮತ್ತು (ಆ) ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ ಜುಲ್ಮಾನೆ, ಅಪರಾಧ ಸಿದ್ದಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಅ)<br>(ಆ)<br>(ಇ) |
| 12. | (ಅ) ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ ತೆಗೆದು ಹಾಕಲಾಗಿದೆಯೇ (removed)/ ಹೊರ ಹಾಕಲಾಗಿದೆಯೇ (terminated)/ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred).<br>(ಆ) ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು, ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಅ)<br>(ಆ) |
| 13. | ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ? | |
| | 1) ವಯಸ್ಸನ್ನು ರುಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ.<br>2) ಹುದ್ದೆಗೆ ಬೇಕಾದ ವಿದ್ಯಾರ್ಹತೆ/ ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ, ಸೆಕ್ಷನ್ 10/ 16ನ್ನು ನೋಡಿ) | |

| | | |
|---|---|---|
| 14. | ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15. | ಅರ್ಜಿದಾರನ ಈಗಿನ ವಾರ್ಷಿಕ ವರಮಾನ ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| 16. | ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ ಅಥವಾ ಅನುಭವ/ ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10 / 16ರನ್ನು ನೋಡಿ). | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

**ಅರ್ಜಿದಾರರಿಂದ ಘೋಷಣೆ**

-----------------------------------------------------------ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ: 68/1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/ *ರಾಜ್ಯ ಆಯೋಗದ *ಅಧ್ಯಕ್ಷ/ *ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/ *ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/ *ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತೀಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*5. ನಾನು ವಕೀಲ ವೃತ್ತಿಯನ್ನು -----------------------------------------ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/ *ಸದಸ್ಯನಾಗಿ ಕಾರ್ಯ ನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

*ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ:

ದಿನಾಂಕ: ಅರ್ಜಿದಾರರ ಸಹಿ

**ಸಹಬಂಧ**

**ಚಾರಿತ್ರ್ಯ ಪ್ರಮಾಣಪತ್ರ**

ಶ್ರೀ--------------------------------------, ಇವರ ಮಗನಾದ/ ಮಗಳಾದ/ ಹೆಂಡತಿಯಾದ/ ಶ್ರೀ/ ಶ್ರೀಮತಿ---------------------------------------------------- ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು ಇವರು ನನಗೆ ಕಳೆದ---------------- ವರ್ಷ ಮತ್ತು---------------- ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/1986)ರ ಕಲಂ 10/ 16ನ್ನು

ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ/ ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ ಶ್ರೀಮತಿ--------------------------------------------------------------------------, (ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

ಸ್ಥಳ:

ದಿನಾಂಕ:

ಸಹಿ ಮತ್ತು ಹೆಸರು; ಮನೆಯ ಪೂರ್ಣ ವಿಳಾಸ ಮತ್ತು ಕಛೇರಿ/ ವೃತ್ತಿಯ ಪೂರ್ಣ ವಿಳಾಸ ಹಾಗೂ ಮನೆಯ ಮತ್ತು ಕಛೇರಿಯ ದೂರವಾಣಿ ಸಂಖ್ಯೆ.

**ಶ್ರೀದೇವಿ ಎಸ್. ಅಂಗಡಿ**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು,
ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

ಪಿ.ಆರ್.947

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**
**ಪ್ರಕಟಣೆ ಸಂಖ್ಯೆ:ಕರಾಆ:ಆಡಳಿತ:27:2004, ದಿನಾಂಕ: 21ನೇ ಜೂನ್, 2004**

**ವಿಷಯ :** ಹಾಸನ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ಹಾಸನ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10 (1)(ಎ)ರಡಿಯಲ್ಲಿ ಆಯ್ಕೆ ಮಾಡುವ ಸಲುವಾಗಿ ಅರ್ಹ ಅಭ್ಯರ್ಥಿಗಳಿಂದ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಹಾಸನ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನಕ್ಕೆ ಆಯ್ಕೆ ಬಯಸಿ ಅರ್ಜಿ ಸಲ್ಲಿಸುವುದಕ್ಕಿಂತ ಮುಂಚಿತವಾಗಿ ಗ್ರಾಹಕ ಸಂರಕ್ಷಣಾ ಕಾಯ್ದೆ 1986 ಮತ್ತು ಕರ್ನಾಟಕ ಗ್ರಾಹಕ ಸಂರಕ್ಷಣಾ ನಿಯಮಗಳು 1988 ಇವುಗಳನ್ನು ಓದಿ ತಿಳಿದುಕೊಂಡು, ಪ್ರತಿ ತಿಂಗಳು ರೂ. 3000-00 ಗೌರವಧನ ಮತ್ತು ರೂ. 300-00 ಸಾರಿಗೆ ಭತ್ಯೆಯನ್ನು ಪಡೆಯಲು ಇಚ್ಛಿಯುಳ್ಳವರು ಈ ಕೆಳಕಂಡ ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ **ದಿನಾಂಕ 13ನೇ ಆಗಸ್ಟ್ 2004ರಂದು ಸಂಜೆ 5-00 ಗಂಟೆಯೊಳಗೆ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಹಾಸನಜಿಲ್ಲೆ, ಹಾಸನ ಇವರಿಗೆ ಸಲ್ಲಿಸತಕ್ಕದ್ದು.**

**ಸದಸ್ಯರಾಗಿ ಆಯ್ಕೆಯಾಗಲು ಇರಬೇಕಾದ ಅರ್ಹತೆಗಳು:**

1) ಅರ್ಜಿ ಸಲ್ಲಿಸುವ ದಿನಾಂಕದಂದಿಗೆ 35 ವರ್ಷ ವಯಸ್ಸಾಗಿರಬೇಕು.
2) ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.
3) ಪ್ರಾಮಾಣಿಕತೆ, ದಕ್ಷತೆ ಹಾಗೂ ನಿಷ್ಠೆ ಇರುವುದರ ಜೊತೆಗೆ ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೆಕ್ಕಪತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ 10 ವರ್ಷಗಳ ಅನುಭವವುಳ್ಳವರಾಗಿರಬೇಕು.
4) ನಿಗದಿತ ಅರ್ಜಿ ನಮೂನೆಗಳ ಪ್ರತಿಯನ್ನು ಯಾವುದೇ ಶುಲ್ಕವಿಲ್ಲದಂತೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಹಾಸನಜಿಲ್ಲೆ, ಹಾಸನ ಇಲ್ಲಿ ಖುದ್ದಾಗಿ ಹಾಜರಾಗಿ ಪಡೆಯುವುದರ ಮೂಲಕ ಸ್ವೀಕರಿಸಬಹುದು.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,
**ಶ್ರೀದೇವಿ ಎಸ್. ಅಂಗಡಿ**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು,
ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

**.............................................ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರ/ ಸದಸ್ಯರ ನೇಮಕಾತಿಗೆ ಅರ್ಜಿ**

(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

ಇತ್ತೀಚಿನ
ಪಾಸ್‌ಪೋರ್ಟ್
ಸೈಜ್‌ನ ಭಾವಚಿತ್ರವನ್ನು
ಲಗತ್ತಿಸಿ

ಅ. ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ:

ಆ. ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ:

ಇ. ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ (ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ)

| | | |
|---|---|---|
| 1. | ಅಭ್ಯರ್ಥಿಯ ಪೂರ್ಣ ಹೆಸರು | ................................................................................<br>(ಸರ್‌ನೇಮ್) (ಹೆಸರು) |
| 2. | ನೀವು ನಿಮ್ಮ ಹೆಸರನ್ನು ಯಾವಾಗಲಾದರೂ ಬದಲಾಯಿಸಿ ಕೊಂಡಿದ್ದೀರಾ? ಹಾಗಿದ್ದಲ್ಲಿ, ಅದಕ್ಕೆ ಕಾರಣಗಳೊಂದಿಗೆ, ಪೂರ್ಣ ವಿವರಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |
| 3. | **ವಿಳಾಸಗಳು:**<br>ಅ. ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ)<br>ಆ. ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರಾ ಅಥವಾ ಯಾವುದೇ ವೃತ್ತಿಯಲ್ಲಿದ್ದೀರಾ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆ) | (ಅ)<br>(ಆ) |
| 4. | ತಂದೆಯ ಅಥವಾ ಪತಿಯ:<br>(ಅ) ಪೂರ್ಣ ಹೆಸರು<br>(ಆ) ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ. (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು)<br>(ಇ) ವೃತ್ತಿ-ವಿಳಾಸ ಮತ್ತು ದೂರವಾಣಿ ಸಂಖ್ಯೆ ಯೊಂದಿಗೆ. (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | (ಅ)<br>(ಆ)<br>(ಇ) |
| 5. | ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ) ವಯಸ್ಸನ್ನು ರುಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ. | |
| 6. | (ಅ) ಜನ್ಮಸ್ಥಳ, ಜಿಲ್ಲೆ ಮತ್ತು ರಾಜ್ಯ.<br>(ಆ) ಪ್ರಸ್ತುತ ನೆಲೆಸಿರುವ ಜಿಲ್ಲೆ. | (ಅ)<br>(ಆ) |
| 7. | (ಅ) ನಿಮ್ಮ ಮತ<br>(ಆ) ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ? ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು. ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು. | (ಅ)<br>(ಆ) |

| | |
|---|---|
| 8. | ಎಸ್.ಎಸ್.ಎಲ್.ಸಿ. ಯಿಂದ ಮೊದಲ್ಗೊಂಡು ವಿದ್ಯಾರ್ಹತೆ- ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ ಕಾಲೇಜಿನ ವಿವರಗಳೊಂದಿಗೆ. (ದೃಢೀಕರಿಸಿದ ಪದವಿ/ ಡಿಪ್ಲೊಮಾ ಪ್ರಮಾಣಪತ್ರಗಳ ಪ್ರತಿ ಲಗತ್ತಿಸುವುದು). |

| ಶಾಲೆ/ ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ ಪದವಿಯ ಹೆಸರು |
|---|---|---|---|
| | | | |

| | |
|---|---|
| 9. | ನೀವು ಯಾವಾಗಲಾದರೂ ಉದ್ಯೋಗದಲ್ಲಿದ್ದಿದ್ದರೆ, ವಿವರ ಒದಗಿಸಿ. |

| ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ | ಅವಧಿ | | ಕಛೇರಿ/ ಸಂಸ್ಥೆಯ ಪೂರ್ಣ ವಿಳಾಸ | ಉದ್ಯೋಗವನ್ನು ತ್ಯಜಿಸಲು ಕಾರಣಗಳು |
|---|---|---|---|---|
| | ಇಂದ (ದಿನಾಂಕ) | ವರೆಗೆ (ದಿನಾಂಕ) | | |
| | | | | |

| | | |
|---|---|---|
| 10. | ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ, ಚಾರಿತ್ರ್ಯ ಪ್ರಮಾಣಪತ್ರಗಳನ್ನು ಮೂಲ ಪತ್ರಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ, ಈ ಅರ್ಜಿಗೆ ಸಹಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ 6 ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣಪತ್ರವಾಗಿರತಕ್ಕದ್ದು. | |
| 11. | (ಅ) ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ?<br>(ಆ) ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ?<br>(ಇ) ಮೇಲಿನ (ಅ) ಅಥವಾ/ ಮತ್ತು (ಆ) ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ ಜುಲ್ಮಾನೆ, ಅಪರಾಧ ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಅ)<br>(ಆ)<br>(ಇ) |

| | | |
|---|---|---|
| 12. | (ಅ) ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ ತೆಗೆದು ಹಾಕಲಾಗಿದೆಯೇ (removed)/ ಹೊರ ಹಾಕಲಾಗಿದೆಯೇ (terminated)/ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred).<br>(ಆ) ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು, ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಅ)<br>(ಆ) |
| 13. | ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ? | |
| | 1) ವಯಸ್ಸನ್ನು ರುಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ.<br>2) ಹುದ್ದೆಗೆ ಬೇಕಾದ ವಿದ್ಯಾರ್ಹತೆ/ ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ.<br>(ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ ಸೆಕ್ಷನ್ 10/ 16ನ್ನು ನೋಡಿ) | |
| 14. | ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15. | ಅರ್ಜಿದಾರನ ಈಗಿನ ವಾರ್ಷಿಕ ವರಮಾನ ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| 16. | ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ ಅಥವಾ ಅನುಭವ/ ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10 / 16ರನ್ನು ನೋಡಿ). | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

**ಅರ್ಜಿದಾರರಿಂದ ಘೋಷಣೆ**

------------------------------------------------------------ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ: 68/1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/ *ರಾಜ್ಯ ಆಯೋಗದ *ಅಧ್ಯಕ್ಷ/ *ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/ *ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/ *ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತೀಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*5. ನಾನು ವಕೀಲ ವೃತ್ತಿಯನ್ನು ------------------------------------------ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/ *ಸದಸ್ಯನಾಗಿ ಕಾರ್ಯ ನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

*ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ:

ದಿನಾಂಕ: ಅರ್ಜಿದಾರರ ಸಹಿ

**ಸಹಬಂಧ**

**ಚಾರಿತ್ರ್ಯ ಪ್ರಮಾಣಪತ್ರ**

ಶ್ರೀ-------------------------------------, ಇವರ ಮಗನಾದ/ ಮಗಳಾದ/ ಹೆಂಡತಿಯಾದ/ ಶ್ರೀ/ ಶ್ರೀಮತಿ----------------------------------------------------- ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು ಇವರು ನನಗೆ ಕಳೆದ---------------- ವರ್ಷ ಮತ್ತು---------------- ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/1986)ರ ಕಲಂ 10/ 16ನ್ನು ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ/ ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ ಶ್ರೀಮತಿ------------------------------------------------------------------------, (ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

ಸ್ಥಳ: ಸಹಿ ಮತ್ತು ಹೆಸರು; ಮನೆಯ ಪೂರ್ಣ ವಿಳಾಸ ಮತ್ತು ಕಛೇರಿ/

ದಿನಾಂಕ: ವೃತ್ತಿಯ ಪೂರ್ಣ ವಿಳಾಸ ಹಾಗೂ ಮನೆಯ ಮತ್ತು ಕಛೇರಿಯ ದೂರವಾಣಿ ಸಂಖ್ಯೆ.

**ಶ್ರೀದೇವಿ ಎಸ್. ಅಂಗಡಿ**

ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು,

ಪಿ.ಆರ್.948 ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಾರ್ಯಾಲಯ, ಹೊಳಲ್ಕೆರೆ**

**ಅಧಿಸೂಚನೆ**

**ನಂ:ತಾಸಕಅ:ಸಿಬ್ಬಂದಿ: ಸಿಆರ್-6:2004-2005, ಹೊಳಲ್ಕೆರೆ, ದಿನಾಂಕ: 24ನೇ ಜೂನ್, 2004**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:56:ಯೋ ಮನ-02(1) ದಿನಾಂಕ: 18.07.2002.

2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಅ.ಸ.ಪ.ಸಂ: ಸಕನಿ:ವಿಘಯೋ: ಕುಂಕೂ:ಕಅ: ಸಿಆರ್-4:02-03, ದಿನಾಂಕ: 21.08.2003.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆಯೇ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ನೇಮಿಸಲಾಗಿದೆ.

| ತಾಲ್ಲೂಕು ಮಟ್ಟದಲ್ಲಿ | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಹೊಳಲ್ಕೆರೆ | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು, ಹೊಳಲ್ಕೆರೆ |

ಸರ್ಕಾರದ ಅಧಿನಿಯಮದ ಸೆಕ್ಷನ್ (3)ಬಿ ಯಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಕಂದಾಯ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1) ಕಛೇರಿ ಅಧೀಕ್ಷಕರು - 1
2) ಪ್ರಥಮ ದರ್ಜೆ ಸಹಾಯಕರು - 1
3) ದ್ವಿತೀಯ ದರ್ಜೆ ಸಹಾಯಕರು - 1
4) ಬೆರಳಚ್ಚುಗಾರರು - 1
5) 'ಡಿ' ದರ್ಜೆ ನೌಕರರು - 1

ಹೊಳಲ್ಕೆರೆ ತಾಲ್ಲೂಕು ಸಮಾಜ ಕಲ್ಯಾಣ ಇಲಾಖೆಯ ಅಧೀನದಡಿ ಈ ಕೆಳಕಂಡ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ.

**1) ಸರ್ಕಾರಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು:**

1) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಹೊಳಲ್ಕೆರೆ
2) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ರಾಮಗಿರಿ
3) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಹೆಚ್.ಡಿ. ಪುರ
4) ಸರ್ಕಾರಿ ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿನಿಲಯ : ಹೊಳಲ್ಕೆರೆ
5) ಸರ್ಕಾರಿ ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿನಿಲಯ : ಎನ್.ಬಿ. ಹಳ್ಳಿ.

**2) ಸರ್ಕಾರಿ ಕಾಲೇಜು ವಿದ್ಯಾರ್ಥಿನಿಲಯಗಳು:**

1) ಸರ್ಕಾರಿ ಕಾಲೇಜು ಬಾಲಕರ ವಿದ್ಯಾರ್ಥಿನಿಲಯ : ಹೊಳಲ್ಕೆರೆ
2) ಸರ್ಕಾರಿ ಕಾಲೇಜು ಬಾಲಕಿಯರ ವಿದ್ಯಾರ್ಥಿನಿಲಯ : ಹೊಳಲ್ಕೆರೆ

**3) ಖಾಸಗಿ ಅನುದಾನಿತ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು:**

1) ಭೋವಿ ಅನುದಾನಿತ ವಿದ್ಯಾರ್ಥಿನಿಲಯ : ಹೊಳಲ್ಕೆರೆ
2) ಶ್ರೀ ರಂಗನಾಥಸ್ವಾಮಿ ಅನುದಾನಿತ ವಿದ್ಯಾರ್ಥಿನಿಲಯ : ಹೊಳಲ್ಕೆರೆ
3) ಆದಿಜಾಂಬವ ಅನುದಾನಿತ ವಿದ್ಯಾರ್ಥಿನಿಲಯ : ಹೊಳಲ್ಕೆರೆ

**4) ಖಾಸಗಿ ಅನುದಾನಿತ ಕಾಲೇಜು ವಿದ್ಯಾರ್ಥಿನಿಲಯಗಳು:**

1) ಶ್ರೀ ಕೊಟ್ರೆನಂಜಪ್ಪ ಪದವಿ ಪೂರ್ವ ಪ.ಜಾತಿ:ಪ.ವರ್ಗ ವಿದ್ಯಾರ್ಥಿನಿಲಯ : ಹೊಳಲ್ಕೆರೆ
2) ಶ್ರೀ ಬಿ. ಪರಮೇಶ್ವರಪ್ಪ ಪ್ರಥಮ ದರ್ಜೆ ಕಾಲೇಜು ಅನುದಾನಿತ ವಿದ್ಯಾರ್ಥಿನಿಲಯ : ಹೊಳಲ್ಕೆರೆ

**5) ಮಹಿಳಾ ಕಲ್ಯಾಣ ಕೇಂದ್ರಗಳು:**

1) ಮಹಿಳಾ ಮತ್ತು ಮಕ್ಕಳ ಕಲ್ಯಾಣ ಕೇಂದ್ರ : ಹಿರೇಎಮ್ಮಿಗನೂರು

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ದಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು
2) ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ಪುರಸ್ಕಾರ ಹಣ
3) ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಸಹಾಯಧನ
4) ಕಾಲೇಜು ವಿದ್ಯಾರ್ಥಿನಿಲಯಗಳು
5) ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ
6) 1 ರಿಂದ 10ನೇ ತರಗತಿಯವರೆಗೆ ವಿದ್ಯಾರ್ಥಿವೇತನ
7) ಮಹಿಳಾ ಕಲ್ಯಾಣ ಕೇಂದ್ರಗಳು
8) ಪ.ಜಾತಿ:ಪ.ವರ್ಗಗಳ ಜನರಿಗಾಗಿ ವಿದ್ಯಾರ್ಥಿನಿಲಯಗಳ ನಿರ್ಮಾಣ
9) ಕಾಲೇಜು ವಿದ್ಯಾರ್ಥಿಗಳಿಗೆ ಸರ್ಕಾರಿ ವಸತಿ ನಿಲಯಗಳ ಪ್ರಾರಂಭ
10) ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
11) ಸ್ವಯಂ ಸೇವಾ ಸಂಘಗಳಿಗೆ ವಿದ್ಯಾರ್ಥಿನಿಲಯಗಳ ನಿರ್ಮಾಣಕ್ಕಾಗಿ ಸಹಾಯಧನ
12) ಕಾನೂನು ಪದವೀಧರರಿಗೆ ಶಿಷ್ಯವೇತನ

13) ವಿಶೇಷ ಘಟಕ ಯೋಜನೆ: ಗಿರಿಜನ ಉಪಯೋಜನೆಗೆ ವಿಶೇಷ ಕೇಂದ್ರೀಯ ನೆರವು

14) ಅಂಬೇಡ್ಕರ್ ವಸತಿ ಯೋಜನೆ

15) ಆಶ್ರಯ ವಸತಿ ಯೋಜನೆ

2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ತಾಲ್ಲೂಕು ಮಟ್ಟದಲ್ಲಿ ಎಲ್ಲಾ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು: ಅ) ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:**

1) ತಾಲ್ಲೂಕಿನ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಗಳ ಜನರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.

2) ಪ್ರತಿ ತಿಂಗಳು ಕನಿಷ್ಠ ಪಕ್ಷ 15 ದಿನ ಪ್ರವಾಸ ಮಾಡುವುದು ಹಾಗೂ 10ದಿನ ಹಳ್ಳಿಗಳಲ್ಲಿ ವಾಸ್ತವ್ಯ ಮಾಡುವುದು ಮತ್ತು ಪರಿಶಿಷ್ಟ ಜಾತಿ: ವರ್ಗದ ಜನರ ಕಾಲೋನಿಗಳಿಗೆ ತಪ್ಪದೇ ಭೇಟಿ ನೀಡುವುದು.

3) ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಯವರಿಂದ ಒಪ್ಪಿಗೆ ಪಡೆದು ಹಣ ಬಿಡುಗಡೆ ಮಾಡಿಸಿಕೊಳ್ಳುವುದು.

4) ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಮುಖ್ಯಸ್ಥರ ಕಾರ್ಯ ನಿರ್ವಹಣೆಯನ್ನು ಪರಿಶೀಲಿಸುವುದು ಹಾಗೂ ಕಾರ್ಯಾಲಯದ ಸಿಬ್ಬಂದಿಯವರ ಕೆಲಸಗಳನ್ನು ತಪಾಸಣೆ ಮಾಡುವುದು.

5) ಮೇಲಾಧಿಕಾರಿಗಳಿಗೆ ತಿಂಗಳ 3 ತಿಂಗಳ, ಅರ್ಧ ವರ್ಷದ ಹಾಗೂ ವರ್ಷದಲ್ಲಿ ಸಾಧಿಸಿದ ಪ್ರಗತಿ ಪತ್ರಿಕೆಗಳನ್ನು ಸಲ್ಲಿಸುವುದು.

6) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ತಿಂಗಳ ಖರ್ಚಿನ ಮಾಹಿತಿ ಪಿರಾಡಿಕಲ್ಸ್ ಮಾಹಿತಿ ಹಾಗೂ ಚೆಕ್ಕುಗಳ ಶಿಷ್ಯವೇತನ ಮಂಜೂರು ಮಾಡಿ ಚೆಕ್ ಅಕೌಂಟ್ ಮಾಹಿತಿ ತಯಾರಿಸಿ ಸಲ್ಲಿಸುವುದು.

7) ತಾಲ್ಲೂಕಿನಲ್ಲಿಯ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಶಾಲೆಗಳಿಗೆ ಹೋಗುವ ಮಕ್ಕಳ ಮಾಹಿತಿಯನ್ನು ಹಾಗೂ ಮೂಲಭೂತ ಮಾಹಿತಿಯನ್ನು ತಯಾರಿಸಿ ಇಡುವುದು.

**ಶಿಕ್ಷಣ:**

8) ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ 1 ರಿಂದ 10ನೇ ತರಗತಿಯ ಮೆಟ್ರಿಕ್ ಪೂರ್ವ ಶಿಷ್ಯವೇತನ ಹಾಗೂ ಮೆಟ್ರಿಕ್ ನಂತರದ ಶಿಷ್ಯವೇತನ ಮಂಜೂರು ಮಾಡುವುದು ಹಾಗೂ ಅದರ ಲೆಕ್ಕಪತ್ರ ಇಡುವುದು ಮತ್ತು ಶಿಷ್ಯವೇತನ ಹಂಚಿಕೆಯಾದ ಪಾವತಿಗಳನ್ನು ಇಡುವುದು.

9) ತಾಲ್ಲೂಕಿನಲ್ಲಿಯ ಎಲ್ಲಾ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಪರಿವೀಕ್ಷಣೆ ಮಾಡುವುದಲ್ಲದೆ ಅನುದಾನಿತ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಸತಿ ನಿಲಯಗಳನ್ನು ವೀಕ್ಷಣೆ ಮಾಡುವುದು.

10) ಎಸ್.ಎಲ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ಬಾರಿಗೆ ಪ್ರಥಮ ಶ್ರೇಣಿಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ಬಹುಮಾನ ಹಣ ವಿತರಣೆ ಮಾಡುವುದು.

11) ಪರಿಶಿಷ್ಟ ಜಾತಿ: ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಪುಕ್ಕಟೆಯಾಗಿ ಕೊಡುವ ಸಮವಸ್ತ್ರ ಹಾಗೂ ಪಠ್ಯ ಪುಸ್ತಕಗಳನ್ನು ಹಾಗೂ ಇತರೆ ಶೈಕ್ಷಣಿಕ ಸಹಾಯವನ್ನು ಸರಿಯಾಗಿ ವಿತರಣೆ ಮಾಡಿದ್ದಾರೆಯೇ ಹೇಗೆ ಅನ್ನುವುದನ್ನು ಖಚಿತಪಡಿಸಿಕೊಳ್ಳುವುದು.

12) ಪರಿಶಿಷ್ಟ ಜಾತಿಯ ಜನರ ಕಾಲೋನಿಯಲ್ಲಿ ವಯಸ್ಕರ ಶಿಕ್ಷಣ ಯುವಜನ ಇಲಾಖೆ ಹಾಗೂ ಸಹಕಾರ ಇಲಾಖೆಯ ವತಿಯಿಂದ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಸಹಕಾರ ನೀಡುವುದು.

13) ಶಿಕ್ಷಣ ಸಂಸ್ಥೆಗಳಲ್ಲಿ ಶಿಷ್ಯವೇತನ ಸರಿಯಾಗಿ ವಿತರಣೆ ಮಾಡಿದ ಬಗ್ಗೆ ಹಾಗೂ ಬುಕ್‌ಬ್ಯಾಂಕ್ ಯೋಜನೆಯಲ್ಲಿ ನೀಡಿದ ಸವಲತ್ತುಗಳನ್ನು ಉಪಯೋಗಿಸಿದ ಬಗ್ಗೆ ತಪಾಸಣೆ ಮಾಡುವುದು.

14) ವಸತಿ ನಿಲಯಗಳ ಕಟ್ಟಡ ಕಟ್ಟುವುದು, ಸಮಾಜ ಮಂದಿರ ಕಟ್ಟುವುದು, ಕಲ್ಯಾಣ ಮಂದಿರ ಕಟ್ಟುವುದು ಹಾಗೂ ಶಾಲಾ ಕಟ್ಟಡ ಕಟ್ಟುವುದನ್ನು ಪರಿಶೀಲಿಸುವುದು ಹಾಗೂ ಕಾರ್ಯಗತ ಮಾಡುವುದು.

15) ಟಿ.ಎಸ್.ಪಿ. ಯೋಜನೆ ಹೊರತುಪಡಿಸಿ ಹುಡ್ಕೋ, ಎನ್‌ಆರ್‌ಇಪಿ, ಪಿಎಲ್‌ಆರ್, ಎಲ್‌ಸಿಎಚ್ ಯೋಜನೆ ಅಡಿಯಲ್ಲಿ ಯೋಗ್ಯ ಫಲಾನುಭವಿಗಳನ್ನು ಗುರುತಿಸುವುದು ಹಾಗೂ ಆಯ್ಕೆ ಮಾಡಿ ಸಂಬಂಧಿಸಿದ ಇಲಾಖೆಗೆ ಒದಗಿಸುವುದು.

16) ಪರಿಶಿಷ್ಟ ಜಾತಿ: ವರ್ಗದ ಜನರ ಮೇಲೆ ನಡೆದ ದೌರ್ಜನ್ಯ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿಆರ್‌ಸೆಲ್ಲಿನ ಅಧಿಕಾರಿಗಳೊಂದಿಗೆ ಸಹಕರಿಸುವುದು ಹಾಗೂ ತಾಲ್ಲೂಕು ಮಟ್ಟದ ನಾಗರಿಕ ಹಕ್ಕು ಸಂರಕ್ಷಣಾ ಸಮಿತಿಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವುದು.

17) ನೈಸರ್ಗಿಕವಾಗಿ ಲುಕ್ಸಾನು ಹಾಗೂ ಬೆಂಕಿ ಅನಾಹುತದಲ್ಲಿ ನೊಂದ ಫಲಾನುಭವಿಗಳಿಗೆ ಧನಸಹಾಯ ಮಾಡುವಲ್ಲಿ ಪ್ರಯತ್ನಿಸುವುದು.

18) ಪರಿಶಿಷ್ಟ ಜಾತಿ: ವರ್ಗದ ಜನರ ಸಲುವಾಗಿ ಮನೆ ಜಾಗ, ಸ್ಮಶಾನ ಜಾಗ, ಈಗಿನ ಕಾಲೋನಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಪ್ರತ್ಯೇಕ ಕಾಲೋನಿ ನಿರ್ಮಾಣದ ಬಗ್ಗೆ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡ ನಿರ್ಮಾಣ ಬಗ್ಗೆ ಭೂಮಿ ಖರೀದಿ ಬಗ್ಗೆ ಪ್ರಕರಣಗಳನ್ನು ತಯಾರಿಸುವುದು. ಪರಿಶಿಷ್ಟ ಜಾತಿ: ವರ್ಗದ ಜನರಿಗೆ ಮನೆಗಳ ನಿರ್ಮಾಣ ಮಾಡಲು ಮಂಜೂರಾದ ಭೂಮಿಯನ್ನು

ಹಾಗೂ ಲೀಜ್ ಮೇಲೆ ಕೊಟ್ಟ ಭೂಮಿಯನ್ನು ವಶಪಡಿಸಿಕೊಳ್ಳುವ ಕ್ರಮ ಜರುಗಿಸುವುದು. ಸರ್ಕಾರಿ ಗ್ರಾಮಠಾಣ ಜಾಗವನ್ನು ಅಭಿವೃದ್ದಿಪಡಿಸಲು ಮತ್ತು ಮನೆಕಟ್ಟಲು ಕಂದಾಯ ಇಲಾಖೆಯಿಂದ ಪಡೆದುಕೊಳ್ಳುವ ಕ್ರಮ ಜರುಗಿಸುವುದು.

**ಆರ್ಥಿಕ ಮತ್ತು ಅಭಿವೃದ್ಧಿ:**

19) ಪರಿಶಿಷ್ಟ ಜಾತಿ: ವರ್ಗದ ಜನರ ಒಕ್ಕಲುತನ ಕಾಲೋನಿಗಳನ್ನು ನಿರ್ವಹಿಸುವುದು ಹಾಗೂ ಜಾಯಿಂಟ್ ಫಾರ್ಮ್, ಕೈಗಾರಿಕೆ ಕೂಲಿಕಾರ ಸಹಕಾರಿ ಸಂಘಗಳನ್ನು ಅವರ ಅನುಕೂಲಕ್ಕಾಗಿ ಮಾಡುವುದು.

20) ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ: ವರ್ಗದ ಸೋಷಿಯಲ್ ಹಾಗೂ ಎಕನಾಮಿಕ್ ಸರ್ವೆ ಮಾಡಿ ಫಲಾನುಭವಿಗಳನ್ನು ವಿಶೇಷ ಘಟಕ ಯೋಜನೆ: ಐಆರ್‌ಡಿಪಿ: ಟಿಎಸ್‌ಪಿ: ಸಂತ್ಯೋದಯ: ಟ್ರಾಯಿಜಂ ತಾ.ಭಾಗ್ಯ: ಐಆರ್‌ಡಿಪಿ: ಗಂಗಾಕಲ್ಯಾಣ: ಭಾಗ್ಯ ಜ್ಯೋತಿ ಹಾಗೂ ನೇಗಿಲ ಭಾಗ್ಯ ಯೋಜನೆಗಳಿಗೆ ಗುರುತಿಸಿ, ಸದರಿ ಯೋಜನೆಗಳನ್ನು ಕಾರ್ಯಗತ ಮಾಡುವುದು.

21) ಭೂರೈತ ಕಾರ್ಮಿಕರನ್ನು ಗುರುತಿಸುವುದು.

22) ಸ್ಥಳೀಯ ಸಂಸ್ಥೆಗಳಲ್ಲಿ ಕಾಯ್ದಿರಿಸಿದ ಶೇಕಡ 18 ಹಣದಲ್ಲಿ ಯೋಜನೆಗಳನ್ನು ಕಾರ್ಯಗತ ಮಾಡುವುದು.

23) ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಮಂಜೂರಿ ಕುರಿತು ಪ್ರಕರಣ ತಯಾರಿಸುವುದು.

24) ಪರಿಶಿಷ್ಟ ಜಾತಿಯ ಜನರ ಮನೆಗಳಿಗೆ ಹಾಗೂ ಕಾಲೋನಿಗೆ ವಿದ್ಯುತ್ ಪೂರೈಕೆ ಕುರಿತು ಹಾಗೂ ಕುಡಿಯುವ ನೀರಿನ ಪೂರೈಕೆ ಕುರಿತು ಸಮೀಕ್ಷೆ ಮಾಡುವುದು.

25) ಪರಿಶಿಷ್ಟ ಜಾತಿ: ವರ್ಗದ ಜನರು ಯಾರು ವೃದ್ಧಾಪ್ಯ ವೇತನ, ವಿಧವಾ ವೇತನ, ಹೆರಿಗೆ ಭತ್ಯೆ, ಅಂಗವಿಕಲರ ಭತ್ಯೆ ಮತ್ತು ಕ್ರಾನಿಕ್ ರೋಗದಿಂದ ಬಳಲುವವರು ಇಂಥಹ ಫಲಾನುಭವಿಗಳನ್ನು ಗುರುತಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಭೇಟಿಯಾಗಿ ಮಂಜೂರಿಸುವುದು.

26) ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರು ತಮ್ಮ ಭೂಮಿಗಳನ್ನು ಮರಳಿ ಪಡೆಯುವಲ್ಲಿ ಸಹಾಯ ಮಾಡುವುದು ಹಾಗೂ ಭೂಮಿ ಮಂಜೂರಿಯಲ್ಲಿ ಸಹಾಯ ಮಾಡುವುದು.

**ಇತರೆ:**

27) ಸರ್ಕಾರಿ ಇಲಾಖೆ, ಅರೆ ಸರ್ಕಾರಿ ಇಲಾಖೆ, ಸ್ಥಳೀಯ ಸಂಸ್ಥೆ ಮತ್ತು ಔದ್ಯೋಗಿಕಗಳಲ್ಲಿ ಪರಿಶಿಷ್ಟ ಜಾತಿ: ವರ್ಗದ ಅಭ್ಯರ್ಥಿಗಳನ್ನು ಸರಕಾರಿ ನಿಯಮಾವಳಿ ಪ್ರಕಾರ ನೇಮಕಾತಿ ಮಾಡಿದ ಬಗ್ಗೆ ಪರಿಶೀಲನೆ ಮಾಡಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ವರದಿ ಸಲ್ಲಿಸುವುದು.

28) ಇತರೆ ಇಲಾಖೆಯಿಂದ ಜಾತಿ ಪರಿಶೀಲನೆ ಅಂತ ಬಂದ ಜಾತಿ ಪ್ರಮಾಣ ಪತ್ರಗಳ ಸಿಂಧುತ್ವವನ್ನು ಪರಿಶೀಲನೆ ಮಾಡುವುದು.

29) ಸರಕಾರಿ ಸಂಘಗಳಲ್ಲಿ ಯೂತ್ ಕ್ಲಬ್‌ಗಳಲ್ಲಿ ಮಹಿಳಾ ಮಂಡಳಿಗಳಲ್ಲಿ ಸ್ಥಳೀಯ ಅಭಿವೃದ್ಧಿ ಬ್ಯಾಂಕ್‌ಗಳಲ್ಲಿ ಪರಿಶಿಷ್ಟ ಜಾತಿ: ವರ್ಗದ ಜನರು ಸದಸ್ಯತ್ವ ಹೊಂದಲು ಪ್ರೋತ್ಸಾಹಿಸುವುದು.

30) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್: ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು: ಜಿಲ್ಲಾ ಪಂಚಾಯತ್ ಅಧಿಕಾರಿಗಳ ಹಾಗೂ ಆಯುಕ್ತರು ಸಮಾಜ ಕಲ್ಯಾಣ ಇಲಾಖೆರವರು ವಹಿಸುವ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**ಆ) ಕಛೇರಿ ಅಧೀಕ್ಷಕರ ಕರ್ತವ್ಯಗಳು:**

1) ಕಛೇರಿಯ ಎಲ್ಲಾ ವಿಭಾಗಗಳ ಮೇಲ್ವಿಚಾರಣೆ ನಡೆಸುವುದು.

2) ಪ್ರಥಮ ದರ್ಜೆ ಸಹಾಯಕರು ಹಾಗೂ ದ್ವಿತೀಯ ದರ್ಜೆ ಸಹಾಯಕರಿಂದ ನಿರ್ವಹಿಸಲ್ಪಡುವ ಕಡತಗಳನ್ನು ಪರಿಶೀಲಿಸಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸುವುದು.

3) ಕಾಲಕಾಲಕ್ಕೆ ಸಿಬ್ಬಂದಿಯ ಮೇಜು ತಪಾಸಣೆ ನಡೆಸುವುದು.

4) ವಿಶೇಷ ಘಟಕ ಯೋಜನೆ: ಗಿರಿಜನ ಉಪಯೋಜನೆಯಡಿ ಬರುವ ಕಡತಗಳ ನಿರ್ವಹಣೆ ಮಾಡುವುದು.

5) ಆಡಿಟ್ ಪ್ಯಾರಾಗಳಿಗೆ ಉತ್ತರಿಸುವುದು.

6) ಇಲಾಖಾ ಕಾರ್ಯಕ್ರಮಗಳ ಪ್ರಗತಿ ವರದಿಗಳನ್ನು ತಯಾರಿಸುವುದು.

7) ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಛೇರಿ ಕೆಲಸದಲ್ಲಿ ಸಹಕರಿಸುವುದು.

8) ಸಾರ್ವಜನಿಕರಿಂದ ಬರುವ ಅಹವಾಲುಗಳನ್ನು ಸ್ವೀಕರಿಸಿ ಅವುಗಳಿಗೆ ಪರಿಹಾರ ನೀಡುವುದು.

**ಇ) ಪ್ರಥಮ ದರ್ಜೆ ಸಹಾಯಕರ ಕರ್ತವ್ಯಗಳು:**

1) ಕಛೇರಿಯ ಎಲ್ಲಾ ಸಿಬ್ಬಂದಿಗಳ ವೇತನ ಹಾಗೂ ಭತ್ಯೆಗಳ ಮಂಜೂರಾತಿ ಕಾರ್ಯ ನಿರ್ವಹಿಸುವುದು.

2) ನೌಕರರ ಸೇವಾಪುಸ್ತಕಗಳನ್ನು ನಿರ್ವಹಿಸುವುದು.

3) ಕಛೇರಿಯ ಹಾಗೂ ವಿದ್ಯಾರ್ಥಿನಿಲಯಗಳ ಲೆಕ್ಕಪತ್ರ ನಿರ್ವಹಣೆ ಮಾಡುವುದು ಹಾಗೂ ನಗದು ಪುಸ್ತಕ ನಿರ್ವಹಣೆ ಮಾಡುವುದು.

4) ಸಿಬ್ಬಂದಿಯ ವೇತನದ ಬಿಲ್ಲುಗಳು ಹಾಗೂ ಡಿ.ಸಿ. ಬಿಲ್ಲುಗಳನ್ನು ತಯಾರಿಸುವುದು.

5) ಮೆಟ್ರಿಕ್ ನಂತರದ ವಿದ್ಯಾರ್ಥಿವೇತನವನ್ನು ಮಂಜೂರು ಮಾಡುವುದು.

6) ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹಧನ ಮಂಜೂರು ಮಾಡುವುದು.

7) ಕಾನೂನು ಪದವೀಧರರಿಗೆ ಶಿಷ್ಯವೇತನ ಮಂಜೂರು ಮಾಡುವುದು.

8) ಕಛೇರಿ ಅಧೀಕ್ಷಕರು ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳವರಿಂದ ನಿರ್ವಹಿಸಲ್ಪಡುವ ಇನ್ನಿತರೆ ಕಾರ್ಯಗಳನ್ನು ನಿರ್ವಹಿಸುವುದು.

**ಈ) ದ್ವಿತೀಯ ದರ್ಜೆ ಸಹಾಯಕರ ಕರ್ತವ್ಯಗಳು:**

1) ಹೊರಗಿನಿಂದ ಕಛೇರಿಗೆ ಬರುವ ಎಲ್ಲಾ ಸರ್ಕಾರಿ ಪತ್ರಗಳನ್ನು ಆಮದು ವಹಿಯಲ್ಲಿ ತೆಗೆದುಕೊಂಡು ನೊಂದಣಿ ಸಂಖ್ಯೆ ನೀಡಿ, ಆಯಾ ವಿಷಯನಿರ್ವಾಹಕರಿಗೆ ನೀಡಿ ಸಹಿ ಪಡೆಯುವುದು.

2) ಎಲ್ಲಾ ವಿಷಯ ನಿರ್ವಾಹಕರಿಂದ ವಿವಿಧ ಇಲಾಖೆ: ಕಛೇರಿಗಳಿಗೆ ಹೋಗುವ ಪತ್ರಗಳನ್ನು ರವಾನೆ ಪುಸ್ತಕದಲ್ಲಿ ದಾಖಲುಮಾಡಿಕೊಂಡು ಸಂಬಂಧಪಟ್ಟ ಕಛೇರಿ: ಅಧಿಕಾರಿಗಳಿಗೆ ಕಳುಹಿಸಿಕೊಡುವುದು.

3) 1 ರಿಂದ 10ನೇ ತರಗತಿವರೆಗಿನ ಪರಿಶಿಷ್ಟ ಜಾತಿ: ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ ಮಂಜೂರು ಮಾಡುವುದು.

4) ಎಸ್.ಎಸ್.ಎಲ್.ಸಿ. ಹಾಗೂ ಮೆಟ್ರಿಕ್ ನಂತರದ ಕೋರ್ಸುಗಳಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿರುವ ಪರಿಶಿಷ್ಟ ಜಾತಿ: ವರ್ಗದ ವಿದ್ಯಾರ್ಥಿಗಳಿಗೆ ಬಹುಮಾನ ಹಣ ಮಂಜೂರು ಮಾಡುವುದು.

5) ಜಾತಿ ಸಿಂಧುತ್ವ ಪ್ರಮಾಣ ಪತ್ರ ನೀಡುವ ಕುರಿತು ಪತ್ರ ವ್ಯವಹಾರ ಮಾಡುವುದು.

6) ಕಛೇರಿ ಅಧೀಕ್ಷಕರು ಹಾಗೂ ಪ್ರ.ದ.ಸ.ರಿಗೆ ಕಛೇರಿ ಕೆಲಸದಲ್ಲಿ ನೆರವಾಗುವುದು.

**ಉ) ಬೆರಳಚ್ಚುಗಾರರ ಕರ್ತವ್ಯಗಳು:**

1) ಕಛೇರಿ ಎಲ್ಲಾ ವಿಭಾಗಗಳು: ಶಾಖೆಗಳಿಂದ ಬರುವ ಕಾಗದ ಪತ್ರಗಳನ್ನು ಬೆರಳಚ್ಚು ಮಾಡಿ, ಸಂಬಂಧಪಟ್ಟ ವಹಿಯಲ್ಲಿ ದಾಖಲು ಮಾಡಿ ಸಂಬಂಧಿಸಿದ ವಿಷಯ ನಿರ್ವಾಹಕರಿಗೆ ನೀಡುವುದು.

2) ಕಛೇರಿ ಅಧೀಕ್ಷಕರು, ಪ್ರ.ದ.ಸ. ಹಾಗೂ ದ್ವಿ.ದ. ಸಹಾಯಕರಿಗೆ ಕಛೇರಿ ಕೆಲಸದಲ್ಲಿ ನೆರವಾಗುವುದು.

**ಊ) ಜವಾನರ ಕರ್ತವ್ಯಗಳು:**

1) ಕಛೇರಿಯ ಎಲ್ಲಾ ಲೆಕ್ಕಪತ್ರಗಳು: ಕಡತಗಳನ್ನು ಸಂಬಂಧಪಟ್ಟ ವಿಷಯ ನಿರ್ವಾಹಕರಿಂದ ಪಡೆದು ಕಛೇರಿ ಅಧೀಕ್ಷಕರಿಗೆ: ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಸಹಿಗಾಗಿ ಮಂಡಿಸುವುದು. ಹಾಗೂ ಸಹಿಯಾದ ಕಡತಗಳನ್ನು ಪುನಃ ಸಂಬಂಧಪಟ್ಟ ವಿಷಯನಿರ್ವಾಹಕರಿಗೆ ಸಲ್ಲಿಸುವುದು.

2) ಕಛೇರಿಯ ಎಲ್ಲಾ ಕೊಠಡಿಗಳು ಹಾಗೂ ಮೇಜು: ಖುರ್ಚಿಗಳನ್ನು ಪ್ರತಿನಿತ್ಯ ಸ್ವಚ್ಛಪಡಿಸುವುದು.

3) ಸ್ಥಳೀಯ ಕಛೇರಿಗಳಿಗೆ ಹೋಗುವ ಸರ್ಕಾರಿ ಪತ್ರಗಳನ್ನು ಮುದ್ದಾಂ ತೆಗೆದುಕೊಂಡು ಹೋಗಿ ಕೊಟ್ಟು ಬರುವುದು.

4) ಕಛೇರಿಯ ಎಲ್ಲಾ ವಿಧವಾದ ಬಿಲ್ಲುಗಳನ್ನು ತಾಲ್ಲೂಕು ಖಜಾನೆಗೆ ಸಲ್ಲಿಸುವುದು ಹಾಗೂ ಖಜಾನೆಯಿಂದ ಚೆಕ್ಕುಗಳನ್ನು ತರುವುದು.

5) ಕಛೇರಿಯಲ್ಲಿ ಕಡತಗಳನ್ನು ಸುರಕ್ಷತೆಯಿಂದ ನೋಡಿಕೊಳ್ಳುವುದು.

**ಎಂ. ಅಬ್ದುಲ್‌ರಜಾಕ್**
ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು
(ಪ್ರಭಾರ) ಹೊಳಲ್ಕೆರೆ.

ಪಿ.ಆರ್.949

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಹಿರಿಯೂರು**

**ಅಧಿಸೂಚನೆ**

**ಸಂ: ತಾಸಕಅ:ಸಿಬ್ಬಂದಿ: ಸಿಆರ್-19:2004-2005, ಹಿರಿಯೂರು, ದಿನಾಂಕ: 18ನೇ ಜೂನ್, 2004**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:56:ಯೋ ಮನ-02(1) ದಿನಾಂಕ: 18.07.2002.

2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಅ.ಸ.ಪ.ಸಂ: ಸಕನಿ:ವಿಘಯೋ: ಕುಂಕೂ:ಕಅ: ಸಿಆರ್-4:02-03, ದಿನಾಂಕ: 21.08.2003.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆಯೇ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಹಿರಿಯೂರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು, ಹಿರಿಯೂರು |

ಸರ್ಕಾರದ ಅಧಿನಿಯಮದ ಸೆಕ್ಷನ್ (3)ಬಿ ಯಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಕಂದಾಯ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1) ಕಛೇರಿ ಅಧೀಕ್ಷಕರು - 1
2) ಪ್ರಥಮ ದರ್ಜೆ ಸಹಾಯಕರು - 1
3) ದ್ವಿತೀಯ ದರ್ಜೆ ಸಹಾಯಕರು - 1
4) ಬೆರಳಚ್ಚುಗಾರರು - 1
5) 'ಡಿ' ದರ್ಜೆ ನೌಕರರು - 1

ಹಿರಿಯೂರು ತಾಲ್ಲೂಕು ಸಮಾಜ ಕಲ್ಯಾಣ ಇಲಾಖೆಯ ಅಧೀನದಡಿ ಈ ಕೆಳಕಂಡ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ.

**1) ಸರ್ಕಾರಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು:**

1) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಹಿರಿಯೂರು ಟೌನ್
2) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ದೇವರಕೊಟ್ಟ
3) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಧರ್ಮಪುರ
4) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಹರಿಯಬ್ಬೆ
5) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಗನ್ನಾಯಕನಹಳ್ಳಿ
6) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಗುಯಿಲಾಳು
7) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಐಮಂಗಲ
8) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಬುರುಜನರೊಪ್ಪ
9) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಎಂ.ಡಿ. ಕೋಟೆ
10) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ವಿ.ವಿ.ಪುರ
11) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ : ಆಲೂರು
12) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ: ದಿಂಡಾವರ
13) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ ಯಲ್ಲದಕೆರೆ
14) ಸರ್ಕಾರಿ ಸಾರ್ವಜನಿಕ ಬಾಲಕರ ವಿದ್ಯಾರ್ಥಿನಿಲಯ (ಪ.ವರ್ಗ) : ಜವನಗೊಂಡನಹಳ್ಳಿ
15) ಸರ್ಕಾರಿ ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿನಿಲಯ : ಹಿರಿಯೂರುಟೌನ್
16) ಸರ್ಕಾರಿ ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿನಿಲಯ : ವಿ.ವಿ.ಪುರ
17) ಸರ್ಕಾರಿ ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿನಿಲಯ : ಖಂಡೇನಹಳ್ಳಿ

**2) ಸರ್ಕಾರಿ ಕಾಲೇಜು ವಿದ್ಯಾರ್ಥಿನಿಲಯಗಳು:**

1) ಸರ್ಕಾರಿ ಕಾಲೇಜು ಬಾಲಕರ ವಿದ್ಯಾರ್ಥಿನಿಲಯ, ಕೆ.ಎಂ. ಕೊಟ್ಟಿಗೆ, ಹಿರಿಯೂರು ಟೌನ್
2) ಸರ್ಕಾರಿ ಕಾಲೇಜು ಬಾಲಕಿಯರ ವಿದ್ಯಾರ್ಥಿನಿಲಯ, ಹಿರಿಯೂರು ಟೌನ್.

**3) ವಸತಿ ಶಾಲೆಗಳು:**

1) ಶ್ರೀ ಮುರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ, ವಿ.ವಿ.ಪುರ
2) ಸರ್ಕಾರಿ ವಸತಿ ಪಾಠಶಾಲೆ, ಕೆ.ಎಂ.ಕೊಟ್ಟಿಗೆ, ಹಿರಿಯೂರು ಟೌನ್.

**4) ಖಾಸಗಿ ಅನುದಾನಿತ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು:**

1) ಆದಿಜಾಂಭವ ಅನುದಾನಿತ ಬಾಲಕರ ವಿದ್ಯಾರ್ಥಿನಿಲಯ, ಹಿರಿಯೂರು
2) ಭೋವಿ ಅನುದಾನಿತ ಬಾಲಕರ ವಿದ್ಯಾರ್ಥಿನಿಲಯ, ಹಿರಿಯೂರು
3) ಶ್ರೀ ವಜ್ರಮಾರುತಿ ಅನುದಾನಿತ ಬಾಲಕಿಯರ ವಿದ್ಯಾರ್ಥಿನಿಲಯ, ಹಿರಿಯೂರು
4) ಶ್ರೀ ಮಾರುತಿ ಅನುದಾನಿತ ಬಾಲಕರ ವಿದ್ಯಾರ್ಥಿನಿಲಯ, ಆದಿವಾಲ
5) ಶ್ರೀ ಪಂಚಲಿಂಗೇಶ್ವರ ಅನುದಾನಿತ ಬಾಲಕರ ವಿದ್ಯಾರ್ಥಿನಿಲಯ, ಧರ್ಮಪುರ.
6) ಶ್ರೀ ಕಾಲಭೈರವೇಶ್ವರ ಅನುದಾನಿತ ಬಾಲಕರ ವಿದ್ಯಾರ್ಥಿನಿಲಯ, (ಎಸ್.ಟಿ) ಹುಲಿತೊಟ್ಲು.

**5) ಖಾಸಗಿ ಅನುದಾನಿತ ಕಾಲೇಜು ವಿದ್ಯಾರ್ಥಿನಿಲಯಗಳು:**

1) ವಿ.ಎಸ್.ಎಫ್. ಕಾಲೇಜು ಬಾಲಕರ ವಿದ್ಯಾರ್ಥಿನಿಲಯ, ಹಿರಿಯೂರು

**6) ಮಹಿಳಾ ಕಲ್ಯಾಣ ಕೇಂದ್ರಗಳು:**

1) ಮಹಿಳಾ ಕಲ್ಯಾಣ ಕೇಂದ್ರ, ಬಬ್ಬೂರ್ ಫಾರಂ.
2) ಮಹಿಳಾ ಕಲ್ಯಾಣ ಕೇಂದ್ರ, ಪಟ್ರೇಹಳ್ಳಿ.

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು
2) ಶ್ರೀ ಮುರಾರ್ಜಿದೇಸಾಯಿ ಮಾದರಿ ವಸತಿ ಶಾಲೆ ಹಾಗೂ ಸರ್ಕಾರಿ ವಸತಿ ಶಾಲೆ.
3) ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಸಹಾಯಧನ

4) ಕಾಲೇಜು ವಿದ್ಯಾರ್ಥಿನಿಲಯಗಳು
5) ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ
6) 1 ರಿಂದ 10ನೇ ತರಗತಿಯವರೆಗೆ ವಿದ್ಯಾರ್ಥಿವೇತನ
7) ಮಹಿಳಾ ಕಲ್ಯಾಣ ಕೇಂದ್ರಗಳು
8) ಪ.ಜಾತಿ:ಪ.ವರ್ಗಗಳ ಜನರಿಗಾಗಿ ವಿದ್ಯಾರ್ಥಿನಿಲಯಗಳ ನಿರ್ಮಾಣ
9) ಕಾಲೇಜು ವಿದ್ಯಾರ್ಥಿಗಳಿಗೆ ಸರ್ಕಾರಿ ವಸತಿ ನಿಲಯಗಳ ಪ್ರಾರಂಭ
10) ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
11) ಸ್ವಯಂ ಸೇವಾ ಸಂಘಗಳಿಗೆ ವಿದ್ಯಾರ್ಥಿನಿಲಯಗಳ ನಿರ್ಮಾಣಕ್ಕಾಗಿ ಸಹಾಯಧನ
12) ಕಾನೂನು ಪದವೀಧರರಿಗೆ ಶಿಷ್ಯವೇತನ
13) ವಿಶೇಷ ಘಟಕ ಯೋಜನೆ: ಗಿರಿಜನ ಉಪಯೋಜನೆಗೆ ವಿಶೇಷ ಕೇಂದ್ರೀಯ ನೆರವು
14) ಅಂಬೇಡ್ಕರ್ ವಸತಿ ಯೋಜನೆ
15) ಆಶ್ರಯ ವಸತಿ ಯೋಜನೆ

2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ತಾಲ್ಲೂಕು ಮಟ್ಟದಲ್ಲಿ ಎಲ್ಲಾ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಇರುತ್ತದೆ.

**1) ಅಧಿಕಾರಿಗಳ ಕರ್ತವ್ಯಗಳು: ಅ) ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:**

1) ತಾಲ್ಲೂಕಿನ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಗಳ ಜನರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.

2) ಪ್ರತಿ ತಿಂಗಳು ಕನಿಷ್ಠ ಪಕ್ಷ 15 ದಿನ ಪ್ರವಾಸ ಮಾಡುವುದು ಹಾಗೂ 10ದಿನ ಹಳ್ಳಿಗಳಲ್ಲಿ ವಾಸ್ತವ್ಯ ಮಾಡುವುದು ಮತ್ತು ಪರಿಶಿಷ್ಟ ಜಾತಿ: ವರ್ಗದ ಜನರ ಕಾಲೋನಿಗಳಿಗೆ ತಪ್ಪದೇ ಭೇಟಿ ನೀಡುವುದು.

3) ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಯವರಿಂದ ಒಪ್ಪಿಗೆ ಪಡೆದು ಹಣ ಬಿಡುಗಡೆ ಮಾಡಿಸಿಕೊಳ್ಳುವುದು.

4) ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಮುಖ್ಯಸ್ಥರ ಕಾರ್ಯ ನಿರ್ವಹಣೆಯನ್ನು ಪರಿಶೀಲಿಸುವುದು ಹಾಗೂ ಕಾರ್ಯಾಲಯದ ಸಿಬ್ಬಂದಿಯವರ ಕೆಲಸಗಳನ್ನು ತಪಾಸಣೆ ಮಾಡುವುದು.

5) ಮೇಲಾಧಿಕಾರಿಗಳಿಗೆ ತಿಂಗಳ 3 ತಿಂಗಳ, ಅರ್ಧ ವರ್ಷದ ಹಾಗೂ ವರ್ಷದಲ್ಲಿ ಸಾಧಿಸಿದ ಪ್ರಗತಿ ಪತ್ರಿಕೆಗಳನ್ನು ಸಲ್ಲಿಸುವುದು.

6) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ತಿಂಗಳ ಖರ್ಚಿನ ಮಾಹಿತಿ ಪಿರಾಡಿಕಲ್ಸ್ ಮಾಹಿತಿ ಹಾಗೂ ಚೆಕ್ಕುಗಳ ಶಿಷ್ಯವೇತನ ಮಂಜೂರು ಮಾಡಿ ಚೆಕ್ ಅಕೌಂಟ್ ಮಾಹಿತಿ ತಯಾರಿಸಿ ಸಲ್ಲಿಸುವುದು.

7) ತಾಲ್ಲೂಕಿನಲ್ಲಿಯ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಶಾಲೆಗಳಿಗೆ ಹೋಗುವ ಮಕ್ಕಳ ಮಾಹಿತಿಯನ್ನು ಹಾಗೂ ಮೂಲಭೂತ ಮಾಹಿತಿಯನ್ನು ತಯಾರಿಸಿ ಇಡುವುದು.

**ಶಿಕ್ಷಣ:**

8) ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ 1 ರಿಂದ 10ನೇ ತರಗತಿಯ ಮೆಟ್ರಿಕ್ ಪೂರ್ವ ಶಿಷ್ಯವೇತನ ಹಾಗೂ ಮೆಟ್ರಿಕ್ ನಂತರದ ಶಿಷ್ಯವೇತನ ಮಂಜೂರು ಮಾಡುವುದು ಹಾಗೂ ಅದರ ಲೆಕ್ಕಪತ್ರ ಇಡುವುದು ಮತ್ತು ಶಿಷ್ಯವೇತನ ಹಂಚಿಕೆಯಾದ ಪಾವತಿಗಳನ್ನು ಇಡುವುದು.

9) ತಾಲ್ಲೂಕಿನಲ್ಲಿಯ ಎಲ್ಲಾ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಪರಿವೀಕ್ಷಣೆ ಮಾಡುವುದಲ್ಲದೆ ಅನುದಾನಿತ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಸತಿ ನಿಲಯಗಳನ್ನು ವೀಕ್ಷಣೆ ಮಾಡುವುದು.

10) ಎಸ್.ಎಲ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ಬಾರಿಗೆ ಪ್ರಥಮ ಶ್ರೇಣಿಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ಬಹುಮಾನ ಹಣ ವಿತರಣೆ ಮಾಡುವುದು.

11) ಪರಿಶಿಷ್ಟ ಜಾತಿ: ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಪುಕ್ಕಟೆಯಾಗಿ ಕೊಡುವ ಸಮವಸ್ತ್ರ ಹಾಗೂ ಪಠ್ಯಪುಸ್ತಕಗಳನ್ನು ಹಾಗೂ ಇತರೆ ಶೈಕ್ಷಣಿಕ ಸಹಾಯವನ್ನು ಸರಿಯಾಗಿ ವಿತರಣೆ ಮಾಡಿದ್ದಾರೆಯೇ ಹೇಗೆ ಅನ್ನುವುದನ್ನು ಖಚಿತಪಡಿಸಿಕೊಳ್ಳುವುದು.

12) ಪರಿಶಿಷ್ಟ ಜಾತಿಯ ಜನರ ಕಾಲೋನಿಯಲ್ಲಿ ವಯಸ್ಕರ ಶಿಕ್ಷಣ ಯುವಜನ ಇಲಾಖೆ ಹಾಗೂ ಸಹಕಾರ ಇಲಾಖೆಯ ವತಿಯಿಂದ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಸಹಕಾರ ನೀಡುವುದು.

13) ಶಿಕ್ಷಣ ಸಂಸ್ಥೆಗಳಲ್ಲಿ ಶಿಷ್ಯವೇತನ ಸರಿಯಾಗಿ ವಿತರಣೆ ಮಾಡಿದ ಬಗ್ಗೆ ಹಾಗೂ ಬುಕ್‌ಬ್ಯಾಂಕ್ ಯೋಜನೆಯಲ್ಲಿ ನೀಡಿದ ಸವಲತ್ತುಗಳನ್ನು ಉಪಯೋಗಿಸಿದ ಬಗ್ಗೆ ತಪಾಸಣೆ ಮಾಡುವುದು.

14) ವಸತಿ ನಿಲಯಗಳ ಕಟ್ಟಡ ಕಟ್ಟುವುದು, ಸಮಾಜ ಮಂದಿರ ಕಟ್ಟುವುದು, ಕಲ್ಯಾಣ ಮಂದಿರ ಕಟ್ಟುವುದು ಹಾಗೂ ಶಾಲಾ ಕಟ್ಟಡ ಕಟ್ಟುವುದನ್ನು ಪರಿಶೀಲಿಸುವುದು ಹಾಗೂ ಕಾರ್ಯಗತ ಮಾಡುವುದು.

15) ಟಿ.ಎಸ್.ಪಿ. ಯೋಜನೆ ಹೊರತುಪಡಿಸಿ ಹುಡ್ಕೋ, ಎನ್‌ಆರ್‌ಇಪಿ, ಪಿಎಲ್‌ಆರ್, ಎಲ್‌ಸಿಎಚ್ ಯೋಜನೆ ಅಡಿಯಲ್ಲಿ ಯೋಗ್ಯ ಫಲಾನುಭವಿಗಳನ್ನು ಗುರುತಿಸುವುದು ಹಾಗೂ ಆಯ್ಕೆ ಮಾಡಿ ಸಂಬಂಧಿಸಿದ ಇಲಾಖೆಗೆ ಒದಗಿಸುವುದು.

16) ಪರಿಶಿಷ್ಟ ಜಾತಿ: ವರ್ಗದ ಜನರ ಮೇಲೆ ನಡೆದ ದೌರ್ಜನ್ಯ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿಆರ್‌ಸೆಲ್ಲಿನ ಅಧಿಕಾರಿಗಳೊಂದಿಗೆ ಸಹಕರಿಸುವುದು ಹಾಗೂ ತಾಲ್ಲೂಕು ಮಟ್ಟದ ನಾಗರಿಕ ಹಕ್ಕು ಸಂರಕ್ಷಣಾ ಸಮಿತಿಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವುದು.

17) ನೈಸರ್ಗಿಕವಾಗಿ ಲುಕ್ಸಾನು ಹಾಗೂ ಬೆಂಕಿ ಅನಾಹುತದಲ್ಲಿ ನೊಂದ ಫಲಾನುಭವಿಗಳಿಗೆ ಧನಸಹಾಯ ಮಾಡುವಲ್ಲಿ ಪ್ರಯತ್ನಿಸುವುದು.

18) ಪರಿಶಿಷ್ಟ ಜಾತಿ: ವರ್ಗದ ಜನರ ಸಲುವಾಗಿ ಮನೆ ಜಾಗ, ಸ್ಮಶಾನ ಜಾಗ, ಈಗಿನ ಕಾಲೋನಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಪ್ರತ್ಯೇಕ ಕಾಲೋನಿ ನಿರ್ಮಾಣದ ಬಗ್ಗೆ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡ ನಿರ್ಮಾಣ ಬಗ್ಗೆ ಭೂಮಿ ಖರೀದಿ ಬಗ್ಗೆ ಪ್ರಕರಣಗಳನ್ನು ತಯಾರಿಸುವುದು. ಪರಿಶಿಷ್ಟ ಜಾತಿ: ವರ್ಗದ ಜನರಿಗೆ ಮನೆಗಳ ನಿರ್ಮಾಣ ಮಾಡಲು ಮಂಜೂರಾದ ಭೂಮಿಯನ್ನು ಹಾಗೂ ಲೀಜ್ ಮೇಲೆ ಕೊಟ್ಟ ಭೂಮಿಯನ್ನು ವಶಪಡಿಸಿಕೊಳ್ಳುವ ಕ್ರಮಜರುಗಿಸುವುದು. ಸರ್ಕಾರಿ ಗ್ರಾಮಠಾಣ ಜಾಗವನ್ನು ಅಭಿವೃದ್ಧಿಪಡಿಸಲು ಮತ್ತು ಮನೆಕಟ್ಟಲು ಕಂದಾಯ ಇಲಾಖೆಯಿಂದ ಪಡೆದುಕೊಳ್ಳುವ ಕ್ರಮ ಜರುಗಿಸುವುದು.

**ಆರ್ಥಿಕ ಮತ್ತು ಅಭಿವೃದ್ಧಿ:**

19) ಪರಿಶಿಷ್ಟ ಜಾತಿ: ವರ್ಗದ ಜನರ ಒಕ್ಕಲುತನ ಕಾಲೋನಿಗಳನ್ನು ನಿರ್ವಹಿಸುವುದು ಹಾಗೂ ಜಾಯಿಂಟ್ ಫಾರ್ಮ್, ಕೈಗಾರಿಕೆ ಕೂಲಿಕಾರ ಸಹಕಾರಿ ಸಂಘಗಳನ್ನು ಅವರ ಅನುಕೂಲಕ್ಕಾಗಿ ಮಾಡುವುದು.

20) ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ: ವರ್ಗದ ಸೋಷಿಯಲ್ ಹಾಗೂ ಎಕನಾಮಿಕ್ ಸರ್ವೆ ಮಾಡಿ ಫಲಾನುಭವಿಗಳನ್ನು ವಿಶೇಷ ಘಟಕ ಯೋಜನೆ: ಐಆರ್‌ಡಿಪಿ: ಟಿಎಸ್‌ಪಿ: ಸಂತ್ಯೋದಯ: ಟ್ರಾಯಿಜಂ ತಾ.ಭಾಗ್ಯ: ಐಆರ್‌ಡಿಪಿ: ಗಂಗಾಕಲ್ಯಾಣ: ಭಾಗ್ಯ ಜ್ಯೋತಿ ಹಾಗೂ ನೇಗಿಲ ಭಾಗ್ಯ ಯೋಜನೆಗಳಿಗೆ ಗುರುತಿಸಿ, ಸದರಿ ಯೋಜನೆಗಳನ್ನು ಕಾರ್ಯಗತ ಮಾಡುವುದು.

21) ಭೂರೈತ ಕಾರ್ಮಿಕರನ್ನು ಗುರುತಿಸುವುದು.

22) ಸ್ಥಳೀಯ ಸಂಸ್ಥೆಗಳಲ್ಲಿ ಕಾಯ್ದಿರಿಸಿದ ಶೇಕಡ 18 ಹಣದಲ್ಲಿ ಯೋಜನೆಗಳನ್ನು ಕಾರ್ಯಗತ ಮಾಡುವುದು.

23) ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಮಂಜೂರಿ ಕುರಿತು ಪ್ರಕರಣ ತಯಾರಿಸುವುದು.

24) ಪರಿಶಿಷ್ಟ ಜಾತಿಯ ಜನರ ವಾಸದ ಮನೆಗಳಿಗೆ ಹಾಗೂ ಕಾಲೋನಿಗೆ ವಿದ್ಯುತ್ ಪೂರೈಕೆ ಕುರಿತು ಹಾಗೂ ಕುಡಿಯುವ ನೀರಿನ ಪೂರೈಕೆ ಕುರಿತು ಸಮೀಕ್ಷೆ ಮಾಡುವುದು.

25) ಪರಿಶಿಷ್ಟ ಜಾತಿ: ವರ್ಗದ ಜನರು ಯಾರು ವೃದ್ಧಾಪ್ಯ ವೇತನ, ವಿಧವಾ ವೇತನ, ಹೆರಿಗೆ ಭತ್ಯೆ, ಅಂಗವಿಕಲರ ಭತ್ಯೆ ಮತ್ತು ಕ್ರಾನಿಕ್ ರೋಗದಿಂದ ಬಳಲುವವರು ಇಂಥಹ ಫಲಾನುಭವಿಗಳನ್ನು ಗುರುತಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಭೇಟಿಯಾಗಿ ಮಂಜೂರಿಸುವುದು.

26) ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರು ತಮ್ಮ ಭೂಮಿಗಳನ್ನು ಮರಳಿ ಪಡೆಯುವಲ್ಲಿ ಸಹಾಯ ಮಾಡುವುದು ಹಾಗೂ ಭೂಮಿ ಮಂಜೂರಿಯಲ್ಲಿ ಸಹಾಯ ಮಾಡುವುದು.

**ಇತರೆ:**

27) ಸರ್ಕಾರಿ ಇಲಾಖೆ, ಅರೆ ಸರ್ಕಾರಿ ಇಲಾಖೆ, ಸ್ಥಳೀಯ ಸಂಸ್ಥೆ ಮತ್ತು ಔದ್ಯೋಗಿಕಗಳಲ್ಲಿ ಪರಿಶಿಷ್ಟ ಜಾತಿ: ವರ್ಗದ ಅಭ್ಯರ್ಥಿಗಳನ್ನು ಸರಕಾರಿ ನಿಯಮಾವಳಿ ಪ್ರಕಾರ ನೇಮಕಾತಿ ಮಾಡಿದ ಬಗ್ಗೆ ಪರಿಶೀಲನೆ ಮಾಡಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ವರದಿ ಸಲ್ಲಿಸುವುದು.

28) ಇತರೆ ಇಲಾಖೆಯಿಂದ ಜಾತಿ ಪರಿಶೀಲನೆ ಅಂತ ಬಂದ ಜಾತಿ ಪ್ರಮಾಣ ಪತ್ರಗಳ ಸಿಂಧುತ್ವವನ್ನು ಪರಿಶೀಲನೆ ಮಾಡುವುದು.

29) ಸರಕಾರಿ ಸಂಘಗಳಲ್ಲಿ ಯೂತ್ ಕ್ಲಬ್‌ಗಳಲ್ಲಿ ಮಹಿಳಾ ಮಂಡಳಿಗಳಲ್ಲಿ ಸ್ಥಳೀಯ ಅಭಿವೃದ್ಧಿ ಬ್ಯಾಂಕ್‌ಗಳಲ್ಲಿ ಪರಿಶಿಷ್ಟ ಜಾತಿ: ವರ್ಗದ ಜನರು ಸದಸ್ಯತ್ವ ಹೊಂದಲು ಪ್ರೋತ್ಸಾಹಿಸುವುದು.

30) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್: ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು: ಜಿಲ್ಲಾ ಪಂಚಾಯತ್ ಅಧಿಕಾರಿಗಳ ಹಾಗೂ ಆಯುಕ್ತರು ಸಮಾಜ ಕಲ್ಯಾಣ ಇಲಾಖೆರವರು ವಹಿಸುವ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**ಆ) ಕಛೇರಿ ಅಧೀಕ್ಷಕರ ಕರ್ತವ್ಯಗಳು:**

1) ಕಛೇರಿಯ ಎಲ್ಲಾ ವಿಭಾಗಗಳ ಮೇಲ್ವಿಚಾರಣೆ ನಡೆಸುವುದು.

2) ಪ್ರಥಮ ದರ್ಜೆ ಸಹಾಯಕರು ಹಾಗೂ ದ್ವಿತೀಯ ದರ್ಜೆ ಸಹಾಯಕರಿಂದ ನಿರ್ವಹಿಸಲ್ಪಡುವ ಕಡತಗಳನ್ನು ಪರಿಶೀಲಿಸಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸುವುದು.

3) ಕಾಲಕಾಲಕ್ಕೆ ಸಿಬ್ಬಂದಿಯ ಮೇಜು ತಪಾಸಣೆ ನಡೆಸುವುದು.

4) ವಿಶೇಷ ಘಟಕ ಯೋಜನೆ: ಗಿರಿಜನ ಉಪಯೋಜನೆಯಡಿ ಬರುವ ಕಡತಗಳ ನಿರ್ವಹಣೆ ಮಾಡುವುದು.

5) ಆಡಿಟ್ ಪ್ಯಾರಾಗಳಿಗೆ ಉತ್ತರಿಸುವುದು.

6) ಇಲಾಖಾ ಕಾರ್ಯಕ್ರಮಗಳ ಪ್ರಗತಿ ವರದಿಗಳನ್ನು ತಯಾರಿಸುವುದು.

7) ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಛೇರಿ ಕೆಲಸದಲ್ಲಿ ಸಹಕರಿಸುವುದು.

8) ಸಾರ್ವಜನಿಕರಿಂದ ಬರುವ ಅಹವಾಲುಗಳನ್ನು ಸ್ವೀಕರಿಸಿ ಅವುಗಳಿಗೆ ಪರಿಹಾರ ನೀಡುವುದು.

**ಇ) ಪ್ರಥಮ ದರ್ಜೆ ಸಹಾಯಕರ ಕರ್ತವ್ಯಗಳು:**

1) ಕಛೇರಿಯ ಎಲ್ಲಾ ಸಿಬ್ಬಂದಿಗಳ ವೇತನ ಹಾಗೂ ಭತ್ಯೆಗಳ ಮಂಜೂರಾತಿ ಕಾರ್ಯ ನಿರ್ವಹಿಸುವುದು.

2) ನೌಕರರ ಸೇವಾಪುಸ್ತಕಗಳನ್ನು ನಿರ್ವಹಿಸುವುದು.

3) ಕಛೇರಿಯ ಹಾಗೂ ವಿದ್ಯಾರ್ಥಿನಿಲಯಗಳ ಲೆಕ್ಕಪತ್ರ ನಿರ್ವಹಣೆ ಮಾಡುವುದು ಹಾಗೂ ನಗದು ಪುಸ್ತಕ ನಿರ್ವಹಣೆ ಮಾಡುವುದು.

4) ಸಿಬ್ಬಂದಿಯ ವೇತನದ ಬಿಲ್ಲುಗಳು ಹಾಗೂ ಡಿ.ಸಿ. ಬಿಲ್ಲುಗಳನ್ನು ತಯಾರಿಸುವುದು.

5) ಮೆಟ್ರಿಕ್ ನಂತರದ ವಿದ್ಯಾರ್ಥಿವೇತನವನ್ನು ಮಂಜೂರು ಮಾಡುವುದು.

6) ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹಧನ ಮಂಜೂರು ಮಾಡುವುದು.

7) ಕಾನೂನು ಪದವೀಧರರಿಗೆ ಶಿಷ್ಯವೇತನ ಮಂಜೂರು ಮಾಡುವುದು.

8) ಕಛೇರಿ ಅಧೀಕ್ಷಕರು ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳವರಿಂದ ನಿರ್ವಹಿಸಲ್ಪಡುವ ಇನ್ನಿತರೆ ಕಾರ್ಯಗಳನ್ನು ನಿರ್ವಹಿಸುವುದು.

**ಈ) ದ್ವಿತೀಯ ದರ್ಜೆ ಸಹಾಯಕರ ಕರ್ತವ್ಯಗಳು:**

1) ಹೊರಗಿನಿಂದ ಕಛೇರಿಗೆ ಬರುವ ಎಲ್ಲಾ ಸರ್ಕಾರಿ ಪತ್ರಗಳನ್ನು ಆಮದು ವಹಿಯಲ್ಲಿ ತೆಗೆದುಕೊಂಡು ನೊಂದಣಿ ಸಂಖ್ಯೆ ನೀಡಿ, ಆಯಾ ವಿಷಯನಿರ್ವಾಹಕರಿಗೆ ನೀಡಿ ಸಹಿ ಪಡೆಯುವುದು.

2) ಎಲ್ಲಾ ವಿಷಯ ನಿರ್ವಾಹಕರಿಂದ ವಿವಿಧ ಇಲಾಖೆ: ಕಛೇರಿಗಳಿಗೆ ಹೋಗುವ ಪತ್ರಗಳನ್ನು ರವಾನೆ ಪುಸ್ತಕದಲ್ಲಿ ದಾಖಲುಮಾಡಿಕೊಂಡು ಸಂಬಂಧಪಟ್ಟ ಕಛೇರಿ: ಅಧಿಕಾರಿಗಳಿಗೆ ಕಳುಹಿಸಿಕೊಡುವುದು.

3) 1 ರಿಂದ 10ನೇ ತರಗತಿವರೆಗಿನ ಪರಿಶಿಷ್ಟ ಜಾತಿ: ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ ಮಂಜೂರು ಮಾಡುವುದು.

4) ಎಸ್.ಎಸ್.ಎಲ್.ಸಿ. ಹಾಗೂ ಮೆಟ್ರಿಕ್ ನಂತರದ ಕೋರ್ಸುಗಳಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿರುವ ಪರಿಶಿಷ್ಟ ಜಾತಿ: ವರ್ಗದ ವಿದ್ಯಾರ್ಥಿಗಳಿಗೆ ಬಹುಮಾನ ಹಣ ಮಂಜೂರು ಮಾಡುವುದು.

5) ಜಾತಿ ಸಿಂಧುತ್ವ ಪ್ರಮಾಣ ಪತ್ರ ನೀಡುವ ಕುರಿತು ಪತ್ರ ವ್ಯವಹಾರ ಮಾಡುವುದು.

6) ಕಛೇರಿ ಅಧೀಕ್ಷಕರು ಹಾಗೂ ಪ್ರ.ದ.ಸ.ರಿಗೆ ಕಛೇರಿ ಕೆಲಸದಲ್ಲಿ ನೆರವಾಗುವುದು.

**ಉ) ಬೆರಳಚ್ಚುಗಾರರ ಕರ್ತವ್ಯಗಳು:**

1) ಕಛೇರಿ ಎಲ್ಲಾ ವಿಭಾಗಗಳು: ಶಾಖೆಗಳಿಂದ ಬರುವ ಕಾಗದ ಪತ್ರಗಳನ್ನು ಬೆರಳಚ್ಚು ಮಾಡಿ, ಸಂಬಂಧಪಟ್ಟ ವಹಿಯಲ್ಲಿ ದಾಖಲು ಮಾಡಿ ಸಂಬಂಧಿಸಿದ ವಿಷಯ ನಿರ್ವಾಹಕರಿಗೆ ನೀಡುವುದು.

2) ಕಛೇರಿ ಅಧೀಕ್ಷಕರು, ಪ್ರ.ದ.ಸ. ಹಾಗೂ ದ್ವಿ.ದ. ಸಹಾಯಕರಿಗೆ ಕಛೇರಿ ಕೆಲಸದಲ್ಲಿ ನೆರವಾಗುವುದು.

**ಊ) ಜವಾನರ ಕರ್ತವ್ಯಗಳು:**

1) ಕಛೇರಿಯ ಎಲ್ಲಾ ಲೆಕ್ಕಪತ್ರಗಳು: ಕಡತಗಳನ್ನು ಸಂಬಂಧಪಟ್ಟ ವಿಷಯ ನಿರ್ವಾಹಕರಿಂದ ಪಡೆದು ಕಛೇರಿ ಅಧೀಕ್ಷಕರಿಗೆ: ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಸಹಿಗಾಗಿ ಮಂಡಿಸುವುದು. ಹಾಗೂ ಸಹಿಯಾದ ಕಡತಗಳನ್ನು ಪುನಃ ಸಂಬಂಧಪಟ್ಟ ವಿಷಯನಿರ್ವಾಹಕರಿಗೆ ಸಲ್ಲಿಸುವುದು.

2) ಕಛೇರಿಯ ಎಲ್ಲಾ ಕೊಠಡಿಗಳು ಹಾಗೂ ಮೇಜು: ಖುರ್ಚಿಗಳನ್ನು ಪ್ರತಿನಿತ್ಯ ಸ್ವಚ್ಛಪಡಿಸುವುದು.

3) ಸ್ಥಳೀಯ ಕಛೇರಿಗಳಿಗೆ ಹೋಗುವ ಸರ್ಕಾರಿ ಪತ್ರಗಳನ್ನು ಮುದ್ದಾಂ ತೆಗೆದುಕೊಂಡು ಹೋಗಿ ಕೊಟ್ಟು ಬರುವುದು.

4) ಕಛೇರಿಯ ಎಲ್ಲಾ ವಿಧವಾದ ಬಿಲ್ಲುಗಳನ್ನು ತಾಲ್ಲೂಕು ಖಜಾನೆಗೆ ಸಲ್ಲಿಸುವುದು ಹಾಗೂ ಖಜಾನೆಯಿಂದ ಚೆಕ್ಕುಗಳನ್ನು ತರುವುದು.

5) ಕಛೇರಿಯಲ್ಲಿ ಕಡತಗಳನ್ನು ಸುರಕ್ಷತೆಯಿಂದ ನೋಡಿಕೊಳ್ಳುವುದು.

ಪಿ.ಆರ್.950 ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು, ಹಿರಿಯೂರು.

## ಸಹಾಯಕ ಎಕ್ಸಿಕ್ಯೂಟಿವ್ ಇಂಜಿನೀಯರವರ ಕಛೇರಿ, ಮಬಕಾನಿ ಉಪವಿಭಾಗ, ನಂ.17, ನವಲಗುಂದ

**ನಂ. ಕನೀನಿನಿ.ಮಬ 17:ಡಿಬಿ, 2004-05:97, ದಿನಾಂಕ:23ನೇ ಜೂನ್, 2004**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ 3ನೇ ಪ್ರಕರಣದ (ಬಿ) ಕಂಡಿಕೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಕನೀನಿನಿ, ಮಲಪ್ರಭಾ ಬಲದಂಡೆ ಕಾಲುವೆ ನಿರ್ಮಾಣ ಉಪವಿಭಾಗ ನಂ.17, ನವಲಗುಂದ ಕಛೇರಿಯ ವಿವರಗಳ ಪ್ರಕಟಣೆ

**(1) ರಚನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಕನೀನಿನಿ, ಮಬಪಕಾನಿ ಉಪವಿಭಾಗ ನಂ.17, ನವಲಗುಂದ ಕಛೇರಿಯ ಪ್ರಸ್ತುತ ಕಾರ್ಯಭಾರವನ್ನು ಶ್ರೀ ಆರ್.ಟಿ. ಪವಾರ, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ನಿರ್ವಹಿಸುತ್ತಿರುವರು, ಹಾಗೂ ಮೂರು ಸಹಾಯಕ ಇಂಜಿನೀಯರರು ಒಬ್ಬರು ಕಿರಿಯ ಇಂಜಿನೀಯರರು, ಓರ್ವ ಪ್ರಥಮ ದರ್ಜೆ ಸಹಾಯಕರು, ಮತ್ತು ಸಿ ಮತ್ತು ಡಿ ವರ್ಗದ ನೌಕರರು, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಕನೀನಿನಿ, ಮಬಪಕಾನಿ ಉಪವಿಭಾಗ, ನಂ.17, ನವಲಗುಂದ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವರು.

**2) ಈ ಉಪವಿಭಾಗದ ವ್ಯಾಪ್ತಿಯಲ್ಲಿ ಬರುವ ಕಾಮಗಾರಿ ಹಾಗೂ ಕೆಲಸಗಳ ವಿವರಗಳು.**

1) ಮಲಪ್ರಭಾ ಬಲದಂಡೆ ಕಾಲುವೆ ಮುಖ್ಯ ಕಾಲುವೆ ಕಿಮೀ 99 ರಿಂದ 104ರ ಕಿಮೀರವರೆಗೆ ಹಾಗೂ ಮಬಪಕಾ 49(ಬಿ) ಮುಖ್ಯ ಹಂಚಿಕೆ ಮತ್ತು ಕಿಮೀ 1 ರಿಂದ 27 ಕಿಮೀ ರವರೆಗೆ, ಹಾಗೂ ಮಬಪಕಾನಿ 55(ಬಿ) ಹಂಚಿಕೆ ಕಿಮೀ 1ರಿಂದ 5 ಕಿಮೀರವರೆಗೆ, ಹಾಗೂ ಮಬಪಕಾನಿ 56(ಎ) ಮುಖ್ಯ ಹಂಚಿಕೆ 1 ರಿಂದ 7ರ ಕಿಮೀ ರವರೆಗೆ ಮತ್ತು 55 (ಬಿ) ಮತ್ತು 56(ಎ) ಬ್ಲಾಕ್‌ನ ಹೊಲಗಾಲುವೆ ನಿರ್ಮಾಣದ

